**ಓದಲಾಗಿದೆ :**

1. ಕರ್ನಾಟಕ ವಿಧಾನ ಮಂಡಲದ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿಯ 14ನೇ ವರದಿಯಲ್ಲಿನ ಶಿಫಾರಸ್ಸು.
2. ಸರ್ಕಾರದ ಆದೇಶ ಸಂ. : ಕಾಇ 49 ಕಾಬಾಸೇ 2011, ದಿನಾಂಕ : 21–07–2012.
3. ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ : ಈಎಸ್‌ಟಿ–1/ಆರ್‌ಪಿಸಿ/ಸಿಆರ್–5/2012–13, ದಿನಾಂಕ : 25–02–13, ಮತ್ತು ತದನಂತರದ ಸ್ಪಷ್ಟೀಕರಣ ಪತ್ರ ದಿನಾಂಕ : 28–03–2013.

**ಪ್ರಸ್ತಾವನೆ :**

1. ಮೇಲೆ (1) ರಲ್ಲಿ ಓದಲಾದ ಕರ್ನಾಟಕ ವಿಧಾನ ಮಂಡಲದ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿಯ 14ನೇ ವರದಿಯಲ್ಲಿ ಕಾರ್ಖಾನೆಗಳು ಮತ್ತು ಬಾಯ್ಲರುಗಳ ಇಲಾಖೆಯಲ್ಲಿ ಅಗತ್ಯ ಹುದ್ದೆಗಳನ್ನು ಸೃಜಿಸಿ ಇಲಾಖೆಯನ್ನು ಬಲಪಡಿಸಲು ಸಮಿತಿಯು ಶಿಫಾರಸ್ಸು ಮಾಡಿತ್ತು.

2. ಮೇಲೆ (2)ರಲ್ಲಿ ಓದಲಾದ ದಿನಾಂಕ : 21–07–2012ರ ಆದೇಶದಲ್ಲಿ ಸರ್ಕಾರವು ಕಾರ್ಖಾನೆಗಳು ಮತ್ತು ಬಾಯ್ಲರುಗಳ ಇಲಾಖೆಯಲ್ಲಿ ವಿವಿಧ ವೃಂದಗಳ ಒಟ್ಟು 24 ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಿದೆ.

3. ಮೇಲೆ (3)ರಲ್ಲಿ ಓದಲಾದ ದಿನಾಂಕ : 25–02–2013ರ ಪತ್ರದಲ್ಲಿ ನಿರ್ದೇಶಕರು, ಕಾರ್ಖಾನೆಗಳು ಮತ್ತು ಬಾಯ್ಲರುಗಳು ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆರವರು ಮತ್ತೆ ಈ ಕೆಳಗಿನಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ : 21–07–2012 ರ ಸರ್ಕಾರದ ಆದೇಶದಲ್ಲಿ ಮಂಜೂರಾಗಿರುವ 10 ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಕಛೇರಿಗಳನ್ನು ಸ್ಥಾಪಿಸಲು ಇಲಾಖೆಯಲ್ಲಿ ಪ್ರತೀ ಕಛೇರಿಗೆ ಹಾಲಿ ಇರುವ ಸಿಬ್ಬಂದಿ ವಿನ್ಯಾಸದಂತೆ ಕನಿಷ್ಠ 40 ಪೂರಕ ಸಿಬ್ಬಂದಿಯ ಅವಶ್ಯಕತೆ ಇರುತ್ತದೆ. ಅಂದರೆ ಕಛೇರಿ ಮುಖ್ಯಾಧಿಕಾರಿಗಳಾದ ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಹುದ್ದೆಗಳು ಸೇರಿದಂತೆ 40 ಹುದ್ದೆಗಳಿದ್ದಲ್ಲಿ ಮಾತ್ರ ಈ 10 ಹೊಸ ಕಛೇರಿಗಳನ್ನು ಸ್ಥಾಪಿಸಲು ಸಾಧ್ಯವಾಗುತ್ತದೆ. ಅದರೆ ಸರ್ಕಾರವು ಕೇವಲ 13 ಪೂರಕ ಸಿಬ್ಬಂದಿ ನೀಡಿರುವುದರಿಂದ ಕಛೇರಿಗಳನ್ನು ಸ್ಥಾಪಿಸಿ ಕಾರ್ಯನಿರತಗೊಳಿಸಲು ಸಾಧ್ಯವಾಗುತ್ತಿಲ್ಲ. ಪ್ರತಿ ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಕಛೇರಿಗೆ ಹಾಲಿ ಇರುವಂತೆ ಈ ಕೆಳಗಿನ ರೀತಿಯಲ್ಲಿ ಅಧಿಕಾರಿ/ಸಿಬ್ಬಂದಿ ಒದಗಿಸಬೇಕಾಗುತ್ತದೆ.

| | | |
|---|---|---|
| 1. | ಕಾರ್ಖಾನೆಗಳ ಸಹಾಯಕ ನಿರ್ದೇಶಕರು | 1 ಹುದ್ದೆ (ಕಛೇರಿ ಮುಖ್ಯಾಧಿಕಾರಿ ಮತ್ತು ಡಿಡಿಒ) |
| 2. | ಪ್ರಥಮ ದರ್ಜೆ ಸಹಾಯಕ | 1 ಹುದ್ದೆ |
| 3. | ದ್ವಿತೀಯ ದರ್ಜೆ ಸಹಾಯಕ | 1 ಹುದ್ದೆ |
| 4. | ಗ್ರೂಪ್ 'ಡಿ' | 1 ಹುದ್ದೆ |
| | ಒಟ್ಟು | 04 ಹುದ್ದೆಗಳು X 10 ಕಛೇರಿಗಳು = 40 ಹುದ್ದೆಗಳು |

ಜೊತೆಗೆ ಎಲ್ಲೆಲ್ಲಿ ಕಾರ್ಖಾನೆಗಳ ಸಾಂದ್ರತೆ ಹೆಚ್ಚಾಗಿದೆಯೋ ಅಂತಹ ಕಛೇರಿಗಳನ್ನು ಗುರುತಿಸಿ ಒಂದೊಂದು ಕಾರ್ಯನಿರ್ವಾಹಕ ಹಾಗೂ ಆಡಳಿತ ಸಹಾಯಕ ಹುದ್ದೆಯನ್ನು ಸಹ ನೀಡಬೇಕಾಗುತ್ತದೆ. ಈ ಹುದ್ದೆಗಳನ್ನು ಸಧ್ಯಕ್ಕೆ ಉಪ ನಿರ್ದೇಶಕರ ಕಛೇರಿಗಳಿಂದ ಸ್ಥಳಾಂತರಿಸಿ ನೀಡಲು ಪರಿಶೀಲಿಸಲಾಗುತ್ತಿದೆ. ಅಂತಹ ಉಪ ನಿರ್ದೇಶಕರ ಕಛೇರಿಗಳಿಗೆ ಹಿರಿಯ ಕಾರ್ಯನಿರ್ವಾಹಕ ಹಾಗೂ ಆಡಳಿತ ಸಹಾಯಕ ಅಥವಾ ಪತ್ರಾಂಕಿತ ವ್ಯವಸ್ಥಾಪಕ ಹುದ್ದೆಗಳನ್ನು ಹೊಸದಾಗಿ ಸೃಜಿಸಿ ಹೆಚ್ಚಿನ ಕರ್ತವ್ಯ ಮತ್ತು ಜವಾಬ್ದಾರಿಯನ್ನು ನೀಡಿ ಉಪ ನಿರ್ದೇಶಕರುಗಳಿಗೆ ಸಹಾಯಕ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುವಂತೆ ನೇಮಿಸಬೇಕಾಗಿದೆ ಎಂದು ಪ್ರಸ್ತಾಪಿಸಿರುತ್ತಾರೆ.

ಈಗಾಗಲೇ ಇಲಾಖೆಯು ತೀವ್ರ ಸಿಬ್ಬಂದಿ ಕೊರತೆ ಎದುರಿಸುತ್ತಿರುವುದಿಂದ ಮರು ನಿಯೋಜನೆಯಿಂದಲೂ (Re-Deployment) ಸಹ ಸಿಬ್ಬಂದಿಯನ್ನು ಒದಗಿಸಿ ಕಛೇರಿಗಳನ್ನು ಸ್ಥಾಪಿಸಲು ಸಾಧ್ಯವಾಗುತ್ತಿಲ್ಲ. ಈಗ ಮಂಜೂರಾಗಿರುವ 24 ಹುದ್ದೆಗಳ ಪೈಕಿ 10 ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಕರ್ನಾಟಕ ಲೋಕ ಸೇವಾ ಆಯೋಗದಿಂದ ಆಯ್ಕೆ ಮಾಡಲು ಈಗಾಗಲೇ ಆಯೋಗಕ್ಕೆ ಬರೆಯಲಾಗಿದೆ. ಅದೇ ರೀತಿ ನೇರ ನೇಮಕಾತಿಯಿಂದ ಭರ್ತಿ ಮಾಡಬೇಕಾದ ಪ್ರಥಮ ದರ್ಜೆ ಸಹಾಯಕರು ಮತ್ತು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಸಹ ಆಯ್ಕೆ ಮಾಡಿ ಒದಗಿಸಲು ಆಯೋಗಕ್ಕೆ ಬರೆಯಲಾಗಿದೆ. ಈ ಪ್ರಕ್ರಿಯೆ ಮುಂದಿನ 3–4 ತಿಂಗಳಲ್ಲಿ ಮುಗಿಯಲಿದ್ದು, ಅಷ್ಟರಲ್ಲಿ ಈ 10 ಹೊಸ ಕಛೇರಿಗಳಿಗೆ ಕಾರ್ಯವ್ಯಾಪ್ತಿ ನೀಡಿ ಮೂಲ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ವಿವಿಧ ಸ್ಥಳಗಳಲ್ಲಿ ಕಛೇರಿಗಳನ್ನು ಸ್ಥಾಪಿಸಿ ಕಾರ್ಯನಿರತಗೊಳಿಸಬೇಕಾಗುತ್ತದೆ. ಆದರೆ ಅಗತ್ಯವಿರುವ ಪೂರಕ ಸಿಬ್ಬಂದಿ ಇಲ್ಲದೆ ಕಛೇರಿಗಳನ್ನು ಸ್ಥಾಪಿಸುವುದರಿಂದ ಸಾರ್ವಜನಿಕರಿಗೆ ಯಾವುದೇ ಅನುಕೂಲಗಳಾಗದೆ ಕಛೇರಿ ಬಾಡಿಗೆ ಹಾಗೂ ಇತರ ನಿರ್ವಹಣಾ ವೆಚ್ಚಗಳಿಗೆ ಮಾತ್ರ ಖರ್ಚು ಮಾಡಬೇಕಾಗುತ್ತದೆ. ಆದಕಾರಣ ಈ ಹೊಸ ಕಛೇರಿಗಳನ್ನು ಸ್ಥಾಪಿಸಿ ಕಾರ್ಯನಿರತಗೊಳಿಸಲು ಮೂಲ ಪ್ರಸ್ತಾವನೆಯಲ್ಲಿ ಕೋರಿರುವಂತೆ ಕನಿಷ್ಟ ಇನ್ನೂ 28 ಹುದ್ದೆಗಳ ಅಗತ್ಯವಿರುತ್ತದೆಂದು ಪ್ರಸ್ತಾಪಿಸಿ ಈ ಕೆಳಗಿನ ಹುದ್ದೆಗಳ ಮಂಜೂರಾತಿ ಕೋರಿರುತ್ತಾರೆ.

| | | | |
|---|---|---|---|
| 1. | ಪತ್ರಾಂಕಿತ ವ್ಯವಸ್ಥಾಪಕರು (ಗ್ರೂಪ್–ಬಿ ವೇತನ ಶ್ರೇಣಿ 22800–43200) | – | 06 ಹುದ್ದೆಗಳು |
| 2. | ಪ್ರಥಮ ದರ್ಜೆ ಸಹಾಯಕರು (ಗ್ರೂಪ್–ಸಿ ವೇತನ ಶ್ರೇಣಿ–14550–26700) | – | 07 ಹುದ್ದೆಗಳು |
| 3. | ದ್ವಿತೀಯ ದರ್ಜೆ ಸಹಾಯಕರು (ಗ್ರೂಪ್–ಸಿ ವೇತನ ಶ್ರೇಣಿ–11600–21000) | – | 05 ಹುದ್ದೆಗಳು |
| 4. | ಸೇವಕರು (ಗ್ರೂಪ್–ಡಿ ವೇತನ ಶ್ರೇಣಿ–9600–14550 | – | 10 ಹುದ್ದೆಗಳು |
| | ಒಟ್ಟು | – | 28 ಹುದ್ದೆಗಳು |

ಇಲಾಖೆಯ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಾಇ 49 ಕಾಬಾಸೇ 2011, ಬೆಂಗಳೂರು, ದಿನಾಂಕ : 10–09–2013.**

ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರು ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಮುಂದಿನ ಹುದ್ದೆಗಳನ್ನು ಸೃಜಿಸಲು ಆದೇಶಿಸಿ ಮಂಜೂರಾತಿ ನೀಡಿದೆ.

| ಕ್ರ. ಸಂ. | ಹುದ್ದೆಗಳ ವಿವರ | ವೇತನ ಶ್ರೇಣಿ | ಮಂಜೂರಾತಿ ನೀಡಿರುವ ಹುದ್ದೆಗಳ ಸಂಖ್ಯೆ |
|---|---|---|---|
| 1 | ಪತ್ರಾಂಕಿತ ವ್ಯವಸ್ಥಾಪಕರು | ರೂ. 21600–40050 | 06 |
| 2 | ಪ್ರಥಮ ದರ್ಜೆ ಸಹಾಯಕರು | ರೂ. 14550–26700 | 07 |
| 3 | ದ್ವಿತೀಯ ದರ್ಜೆ ಸಹಾಯಕರು | ರೂ. 11600–21000 | 05 |
| | | ಒಟ್ಟು | 18 |

ಮುಂದುವರಿದು, 10 ಗ್ರೂಫ್ 'ಡಿ' ಹುದ್ದೆಗಳ ಸೇವೆಯನ್ನು ಹೊರ ಗುತ್ತಿಗೆ ಆಧಾರದ ಮೇಲೆ ಪಡೆಯಲು ಸಹ ಮಂಜೂರಾತಿ ನೀಡಿದೆ.

ಈ ಬಾಬ್ತು ವೆಚ್ಚವನ್ನು "ಲೆಕ್ಕಶೀರ್ಷಿಕೆ 2230–01–102–0–01 ಇನ್ಸ್‌ಪೆಕ್ಟರ್ ಆಫ್ ಫ್ಯಾಕ್ಟರೀಸ್ (ಯೋಜನೇತರ ವೆಚ್ಚಗಳು)" ಅಡಿಯಲ್ಲಿ ಭರಿಸತಕ್ಕದ್ದು. ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳ ಅನುಸಾರ ಸದರಿ ಹುದ್ದೆಗಳನ್ನು ಭರ್ತಿ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ 229 ವೆಚ್ಚ–9/2012, ದಿನಾಂಕ : 29–08–2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಶಿವರಾಮ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ (ಕಾರ್ಖಾನೆಗಳು ಮತ್ತು ಬಾಯ್ಲರುಗಳು).

PR. 948

SC-125

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿವಿಧ ಕಾರ್ಯಕ್ರಮ/ಯೋಜನೆಗಳಿಗೆ ನಿಗದಿಪಡಿಸಿರುವ ಆದಾಯ ಮಿತಿಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಕಇ 5 ಬಿಸಿಎ 1995, ದಿನಾಂಕ : 1–9–1995.
2. ಸರ್ಕಾರದ ಆದೇಶ ಸಂಖ್ಯೆ : ಸಕಇ 171 ಬಿಸಿಎ 1996, ದಿನಾಂಕ : 11–7–1997.
3. ಸರ್ಕಾರದ ಆದೇಶ ಸಂಖ್ಯೆ : ಸಕಇ 191 ಬಿಎಂಎಸ್ 2001, ದಿನಾಂಕ : 11–6–2001
4. ಸರ್ಕಾರದ ಆದೇಶ ಸಂಖ್ಯೆ : ಸಕಇ 190 ಬಿಎಂಎಸ್ 2001, ದಿನಾಂಕ : 12–6–2001
5. ಸರ್ಕಾರದ ಆದೇಶ ಸಂಖ್ಯೆ : ಸಕಇ 225 ಬಿಸಿಎ 2000, ದಿನಾಂಕ : 30–3–2002
6. ಸರ್ಕಾರದ ಆದೇಶ ಸಂಖ್ಯೆ : ಸಕಇ 359 ಪಕವಿ 2009, ದಿನಾಂಕ : 29–1–2010
7. ಸರ್ಕಾರದ ಆದೇಶ ಸಂಖ್ಯೆ : ಸಕಇ 85 ಎಸ್‌ಎಲ್‌ಪಿ 2009, ದಿನಾಂಕ : 16–9–2010
8. ಸರ್ಕಾರದ ಆದೇಶ ಸಂಖ್ಯೆ : ಸಕಇ 132 ಮೊದೇಶಾ 2010, ದಿನಾಂಕ : 1–12–2010.
9. ಕೇಂದ್ರ ಸರ್ಕಾರದ ಆದೇಶ ಸಂಖ್ಯೆ : 11014/21/2006 ಬಿಸಿ1 ದಿನಾಂಕ : 11–8–2011.
10. ಸರ್ಕಾರದ ಆದೇಶ ಸಂಖ್ಯೆ : ಸಕಇ 96 ಬಿಎಂಎಸ್ 2011, ದಿನಾಂಕ : 22–9–2011
11. ಸರ್ಕಾರದ ಆದೇಶ ಸಂಖ್ಯೆ : ಸಕಇ 160 ಬಿಎಂಎಸ್ 2012, ದಿನಾಂಕ : 29–6–2012
12. ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಬೆಂಗಳೂರು ಇವರ ಏಕ ಕಡತ ಸಂಖ್ಯೆ : ಹಿಂವಕ : ವನಿಶಾ : ಸಿಆರ್–51/2013–14, ದಿನಾಂಕ : 20–7–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ 1 ರಿಂದ 11 ರವರೆಗಿನ ಆದೇಶಗಳಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿವಿಧ ಕಾರ್ಯಕ್ರಮ/ಯೋಜನೆಗಳಿಗೆ ಸಂಬಂಧಿಸಿದಂತೆ ಆಗಿಂದಾಗ್ಗೆ ವಾರ್ಷಿಕ ಆದಾಯ ಮಿತಿಗಳನ್ನು ನಿಗದಿಪಡಿಸಿಕೊಂಡು ಬರಲಾಗುತ್ತಿದೆ. ಈ ರೀತಿ ನಿಗದಿಪಡಿಸಿರುವ ಬೇರೆ ಬೇರೆ ಆದಾಯ ಮಿತಿಗಳನ್ನು ಕ್ರೋಢೀಕರಿಸಿ, ವಿವಿಧ ಗುಂಪಿನ ಕಾರ್ಯಕ್ರಮ/ಯೋಜನೆವಾರು ಏಕರೂಪವಾದ ಆದಾಯ ಮಿತಿಗಳನ್ನು ನಿಗದಿಪಡಿಸುವ ಅಗತ್ಯತೆ ಇರುತ್ತದೆಂದೂ, ಈ ಹಿನ್ನೆಲೆಯಲ್ಲಿ ಕೇವಲ ಶುಲ್ಕ ವಿನಾಯಿತಿ/ವಿದ್ಯಾರ್ಥಿವೇತನ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಮಾತ್ರ ವಾರ್ಷಿಕ ಆದಾಯ ಮಿತಿ ದರಗಳನ್ನು ಪರಿಷ್ಕರಿಸುವುದಕ್ಕೆ ಬದಲಾಗಿ, ಈ ಇಲಾಖೆಯ ಎಲ್ಲಾ ಕಾರ್ಯಕ್ರಮಗಳು/ ಯೋಜನೆಗಳಿಗೆ ಸಂಬಂಧಿಸಿದಂತೆ ಬಹಳ ವರ್ಷಗಳ ಹಿಂದೆ ನಿಗದಿಪಡಿಸಲಾಗಿರುವ ವಾರ್ಷಿಕ ಆದಾಯ ಮಿತಿಯ ದರಗಳನ್ನು ಸಮಗ್ರವಾಗಿ ಪರಿಷ್ಕರಿಸಲು ಕೋರಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ : 12 ರಲ್ಲಿ ಓದಲಾದ ಏಕಕಡತದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಯುಕ್ತರು ಸಲ್ಲಿಸಿರುವ ಪ್ರಸ್ತಾವನೆಯ ಮೇರೆಗೆ ಹಾಗೂ ಇತ್ತೀಚಿನ ವರ್ಷಗಳಲ್ಲಿ ಉಂಟಾಗಿರುವ ಹಣದುಬ್ಬರವನ್ನು ಗಮನದಲ್ಲಿರಿಸಿಕೊಂಡು ಹಿಂದುಳಿದ ವರ್ಗಗಳಲ್ಲಿನ ಬಡ ವಿದ್ಯಾರ್ಥಿಗಳಿಗೆ ಹೆಚ್ಚಿನ ಅನುಕೂಲಗಳನ್ನು ಕಲ್ಪಿಸುವ ಹಿತದೃಷ್ಟಿಯಿಂದ ಇಲಾಖೆಯ ವಿವಿಧ ಕಾರ್ಯಕ್ರಮ/ಯೋಜನೆಗಳಲ್ಲಿನ ಸವಲತ್ತುಗಳನ್ನು ಪಡೆದುಕೊಳ್ಳುವ ಸಲುವಾಗಿ ಹಾಲಿ ನಿಗದಿಪಡಿಸಿರುವ ಆದಾಯಮಿತಿಯನ್ನು ಪರಿಷ್ಕರಿಸಲು ಸರ್ಕಾರವು ನಿರ್ಣಯಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹಿಂವಇ 397 ಬಿಎಂಎಸ್ 2013, ಬೆಂಗಳೂರು, ದಿನಾಂಕ : 05-09-2013.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿವಿಧ ಯೋಜನೆ/ಕಾರ್ಯಕ್ರಮಗಳಿಗೆ ಮೇಲೆ ಓದಲಾದ ಆದೇಶಗಳಲ್ಲಿ ನಿಗದಿಪಡಿಸಲಾಗಿದ್ದ ಆದಾಯ ಮಿತಿಗಳನ್ನು ಈ ಆದೇಶದ **ಅನುಬಂಧ**ದಲ್ಲಿರುವಂತೆ ತಕ್ಷಣದಿಂದ ಜಾರಿಗೆ ಬರುವಂತೆ ಪರಿಷ್ಕರಿಸಿ ಆದೇಶಿಸಿದೆ.

ವಿವಿಧ ಕಾರ್ಯಕ್ರಮಗಳಡಿ ಅರ್ಹತೆಗಾಗಿ ನಿಗದಿಪಡಿಸಿರುವ ವಾರ್ಷಿಕ ಆದಾಯದ ಮಿತಿಯನ್ನು ಸರ್ಕಾರಕ್ಕೆ ಯಾವುದೇ ಹೆಚ್ಚಿನ ಆರ್ಥಿಕ ಹೊರೆಯಾಗದಂತೆ ಹಾಗೂ ಆಯಾ ಕಾರ್ಯಕ್ರಮಕ್ಕೆ ಆಯವ್ಯಯದಲ್ಲಿ ನಿಗದಿಪಡಿಸಲಾದ ಅನುದಾನದ ಮಿತಿಯಲ್ಲಿಯೇ ವೆಚ್ಚಗಳನ್ನು ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 596 ವೆಚ್ಚ-3/13, ದಿನಾಂಕ : 4-9-2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ-2,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ : ಹಿಂವಇ 397 ಬಿಎಂಎಸ್ 2013, ಬೆಂಗಳೂರು, ದಿನಾಂಕ : 05-09-2013ಕ್ಕೆ**

**ಅನುಬಂಧ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿವಿಧ ಕಾರ್ಯಕ್ರಮ/ಯೋಜನೆಗಳಿಗೆ ನಿಗದಿಪಡಿಸಿರುವ ಆದಾಯ ಮಿತಿಗಳು**

| ಕ್ರ. ಸಂ. | ಯೋಜನೆಗಳು | ನಿಗದಿಪಡಿಸಿರುವ ವಾರ್ಷಿಕ ಆದಾಯ ಮಿತಿ | |
|---|---|---|---|
| | | ಪ್ರವರ್ಗ-1ಕ್ಕೆ | ಪ್ರವರ್ಗ-2ಎ, 2ಬಿ, 3ಎ, 3ಬಿ ಗಳಿಗೆ |
| 1 | 2 | 3 | 4 |
| 1 | ಮೆಟ್ರಿಕ್-ಪೂರ್ವ ವಿದ್ಯಾರ್ಥಿ ವೇತನ (ಕೇಂದ್ರ ಪುರಸ್ಕೃತ ಯೋಜನೆ | ರೂ. 44,500/- | ರೂ. 44,500/- |
| 2 | ಸರ್ಕಾರಿ ಹಾಗೂ ಖಾಸಗಿ ಮೆಟ್ರಿಕ್-ಪೂರ್ವ ವಿದ್ಯಾರ್ಥಿ ನಿಲಯಗಳ ಪ್ರವೇಶಕ್ಕಾಗಿ | ರೂ. 1.00 ಲಕ್ಷ | ರೂ. 44,500/- |
| 3 | ಮೆಟ್ರಿಕ್-ಪೂರ್ವ ಬೇತನ | ರೂ. 1.00 ಲಕ್ಷ | ರೂ. 44,500/- |
| 4 | ಮೊರಾರ್ಜಿ ದೇಸಾಯಿ/ಕಿತ್ತೂರು ರಾಣಿ ಚೆನ್ನಮ್ಮ/ಅಟಲ್ ಬಿಹಾರಿ ವಾಜಪೇಯಿ, ವಸತಿ ಶಾಲೆಗಳ ಪ್ರವೇಶಕ್ಕಾಗಿ | ರೂ. 1.00 ಲಕ್ಷ | ರೂ. 44,500/- |
| 5 | ಆಶ್ರಮ ಶಾಲೆಗಳಿಗೆ ಪ್ರವೇಶಕ್ಕಾಗಿ | ರೂ. 1.00 ಲಕ್ಷ | ರೂ. 44,500/- |
| 6 | **ಅನಾಥಾಲಯ ಪ್ರವೇಶಕ್ಕಾಗಿ**<br>ಎ) ಅನಾಥರು | ಆದಯ ಮಿತಿ ಇಲ್ಲ | ಆದಾಯ ಮಿತಿ ಇಲ್ಲ |
| | ಬಿ) ನಿರ್ಗತಿಕರು | ರೂ. 1.00 ಲಕ್ಷ | ರೂ. 44,500/- |
| 7 | ಮೆಟ್ರಿಕ್-ನಂತರದ ವಿದ್ಯಾರ್ಥಿ ವೇತನ (ಕೇಂದ್ರ ಪುರಸ್ಕೃತ ಯೋಜನೆ) | ರೂ. 1.00 ಲಕ್ಷ | ರೂ. 1.00 ಲಕ್ಷ |
| 8 | ಮೆಟ್ರಿಕ್-ನಂತರದ ವಿದ್ಯಾರ್ಥಿ ವೇತನ | ರೂ. 2.50 ಲಕ್ಷ | ರೂ. 1.00 ಲಕ್ಷ |
| 9 | ಸರ್ಕಾರಿ ಹಾಗೂ ಖಾಸಗಿ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳ ಪ್ರವೇಶಕ್ಕಾಗಿ | ರೂ. 2.50 ಲಕ್ಷ | ರೂ. 1.00 ಲಕ್ಷ |
| 10 | ಶುಲ್ಕ ವಿನಾಯಿತಿ | ರೂ. 2.50 ಲಕ್ಷ | ರೂ. 1.00 ಲಕ್ಷ |
| 11 | ಊಟ ಮತ್ತು ವಸತಿ ಸಹಾಯ ಯೋಜನೆ | ರೂ. 2.50 ಲಕ್ಷ | ರೂ. 1.00 ಲಕ್ಷ |
| 12 | ನರ್ಸಿಂಗ್/ಪ್ಯಾರಾ ಮೆಡಿಕಲ್ ತರಬೇತಿ | ರೂ. 2.50 ಲಕ್ಷ | ರೂ. 1.00 ಲಕ್ಷ |
| 13 | ಕೌಶಲ್ಯ ತರಬೇತಿ/ಹೊಲಿಗೆ ತರಬೇತಿ | ರೂ. 2.50 ಲಕ್ಷ | ರೂ. 1.00 ಲಕ್ಷ |

| ಕ್ರ. ಸಂ. | ಯೋಜನೆಗಳು | ನಿಗದಿಪಡಿಸಿರುವ ವಾರ್ಷಿಕ ಆದಾಯ ಮಿತಿ | |
|---|---|---|---|
| | | ಪ್ರವರ್ಗ–1ಕ್ಕೆ | ಪ್ರವರ್ಗ–2ಎ, 2ಬಿ, 3ಎ, 3ಬಿ ಗಳಿಗೆ |
| **1** | **2** | **3** | **4** |
| 14 | ಕಾನೂನು ತರಬೇತಿ | ರೂ. 3.50 ಲಕ್ಷ | ರೂ. 2.50 ಲಕ್ಷ |
| 15 | ಸ್ಪರ್ಧಾತ್ಮಕ ಪರೀಕ್ಷೆಗಳಿಗಾಗಿ (ಐಎಎಸ್/ಕೆಎಎಸ್ ಇತ್ಯಾದಿ) | ರೂ. 4.50 ಲಕ್ಷ | ರೂ. 3.50 ಲಕ್ಷ |
| 16 | ವಿದೇಶ ವ್ಯಾಸಂಗಕ್ಕಾಗಿ ಆರ್ಥಿಕ ನೆರವು | ರೂ. 4.50 ಲಕ್ಷ | ರೂ. 4.50 ಲಕ್ಷ |

**ಅಲೆಮಾರಿ ಜನಾಂಗದವರಿಗಾಗಿ ಕಾರ್ಯಕ್ರಮಗಳು**

| ಕ್ರ. ಸಂ. | ಯೋಜನೆಗಳು | ನಿಗದಿಪಡಿಸಿದ ವಾರ್ಷಿಕ ಆದಾಯ ಮಿತಿ |
|---|---|---|
| 1 | ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಅರ್ಹತಾ ವಿದ್ಯಾರ್ಥಿ ವೇತನ | ರೂ. 2.50 ಲಕ್ಷ |
| 2 | ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ವಿಶೇಷ ಪ್ರೋತ್ಸಾಹ ಧನ | ರೂ. 2.00 ಲಕ್ಷ |
| 3 | ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶಾವಕಾಶ | ರೂ. 2.00 ಲಕ್ಷ |
| 4 | ವಸತಿ ಯೋಜನೆ | ರೂ. 2.00 ಲಕ್ಷ |

**ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**PR. 949**
**SC-500**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಎ. ಶೇಖರನ್, ಹಿಂದಿನ ಶಸ್ತ್ರಚಿಕಿತ್ಸಕರು, ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಪ್ರಸ್ತುತ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಕುಣಿಗಲ್ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಮತ್ತು ಶ್ರೀ ಜೆ. ದೇವೇಗೌಡ, 'ಡಿ' ದರ್ಜೆ ನೌಕರರು, (ನಿವೃತ್ತ) ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಇವರ ನಿವೃತ್ತಿ ವೇತನದ ಶೇಕಡಾ 50 (ಐವತ್ತು) ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ :**

1. ಉಪ ಆರಕ್ಷಕ ಮಹಾನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಎಲ್‌ಓಕೆ/ಐಎನ್‌ವಿ (ಜಿ)/ಎಂ–70/ಸಿಆರ್. ಸಂಖ್ಯೆ : 6/2001 ಹೆಚ್‌ಎಸ್‌ಎನ್, ದಿನಾಂಕ : 15–1–2002.
2. ಸರ್ಕಾರದ ಆದೇಶ ಸಂಖ್ಯೆ : ಆಕುಕ 121 ಎಂಎಸ್‌ಎ 2001, ದಿನಾಂಕ : 17–04–2002.
3. ಸರ್ಕಾರದ ಆದೇಶ ಸಂಖ್ಯೆ : ಆಕುಕ 121 ಎಂಎಸ್‌ಎ 2001, ದಿನಾಂಕ : 16–04–2003.
4. ನಿರ್ದೇಶಕರು, ಆ.ಕು.ಕ. ಸೇವೆಗಳು, ಬೆಂಗಳೂರು ಇವರ ಆದೇಶ ಸಂಖ್ಯೆ : ಡಿಪಿಜಿ (1)/ಮೈವಿ/95/ 2001–02, ದಿನಾಂಕ : 06–06–2003.
5. ಹಾಸನದ ಪ್ರಿನ್ಸಿಪಾಲ್ ಸೆಷನ್ಸ್ ಜಡ್ಜ್ ಮತ್ತು ಸ್ಪೆಷಲ್ ಜಡ್ಜ್ ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ : 23/2003ರಲ್ಲಿ ದಿನಾಂಕ : 29–09–2006ರ ತೀರ್ಪು.
6. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ/457/ಹೆಚ್.ಸಿ.ಪಿ. 2/2007, ದಿನಾಂಕ : 24–01–2007.
7. ಗೌರವಾನ್ವಿತ ಉಚ್ಚ ನ್ಯಾಯಾಲಯದ ಕ್ರಿಮಿನಲ್ ಅಪೀಲ್ ಸಂಖ್ಯೆ : 417/2007 ರಲ್ಲಿ ದಿನಾಂಕ : 10–08–2011ರ ತೀರ್ಪು.
8. ಸರ್ಕಾರದ 2ನೇ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ : ಆಕುಕ 121 ಎಂಎಸ್‌ಎ 2001, ದಿನಾಂಕ : 22–02–2013.
9. ಡಾ॥ ಎ. ಶೇಖರನ್, ಇವರ ರಕ್ಷಣಾ ಹೇಳಿಕೆ ದಿನಾಂಕ : 13–03–2013.
10. ಮುಖ್ಯ ಆಡಳಿತಾಧಿಕಾರಿಗಳು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಡಿಪಿಜಿ/ಮೈವಿ/95/2001–02, ದಿನಾಂಕ : 30–05–2013.
11. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂಖ್ಯೆ : ಪಿ.ಎಸ್.ಸಿ/46/ಸಿಎನ್‌ಎಸ್/2013, ದಿನಾಂಕ : 12–06–2013.

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಉಪ ಆರಕ್ಷಕ ಮಹಾನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಡಾ॥ ಎ. ಶೇಖರನ್, ಶಸ್ತ್ರಚಿಕಿತ್ಸಕರು ಮತ್ತು ಶ್ರೀ ಜೆ. ದೇವೇಗೌಡ, 'ಡಿ' ದರ್ಜೆ ನೌಕರ, ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ ಹಾಸನ ಜಿಲ್ಲೆ ಇವರು ಶ್ರೀ ಕರೀಗೌಡ ಎಂಬ ಹುಡುಗನಿಗೆ ಹರ್ನಿಯಾ ಕಾಯಿಲೆಗೆ ಸಂಬಂಧಪಟ್ಟಂತೆ ಆಪರೇಷನ್ ಮಾಡಲು ಶ್ರೀಮತಿ ರಾಜಮ್ಮ ಎಂಬುವರಿಂದ 2,000/– ರೂ. ಲಂಚದ ಹಣವನ್ನು ದಿನಾಂಕ : 3–11–2001 ರಂದು ಕೇಳಿ ಪಡೆಯುತ್ತಿದ್ದಾಗ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿದ್ದು, ಸದರಿಯವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಹಾಸನ ಪೊಲೀಸ್ ಠಾಣೆಯಲ್ಲಿ ಮೊ.ನಂ. 6/2001 ಕಲಂ 7.13(1)(ಡಿ) ಸಹಕಲಂ 13(2) ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ರೀತ್ಯಾ ಪ್ರಕರಣ ದಾಖಲಾಗಿದ್ದು, ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಡಾ॥ ಎ. ಶೇಖರನ್ ಇವರನ್ನು ಅಮಾನತ್ತು ಮಾಡುವಂತೆ ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಡಾ॥ ಎ. ಶೇಖರನ್ ಶಸ್ತ್ರಚಿಕಿತ್ಸಕರು, ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಇವರನ್ನು ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸದರಿಯವರ ವಿರುದ್ಧ ಶಿಸ್ತುಕ್ರಮ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಡಾ॥ ಎ. ಶೇಖರನ್ ಶಸ್ತ್ರಚಿಕಿತ್ಸಕರು, ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಇವರ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸದರಿಯವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಮೇಲೆ ಕ್ರಮ ಸಂಖ್ಯೆ : (4)ರಲ್ಲಿ ಓದಲಾದ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಆದೇಶದಲ್ಲಿ ಶ್ರೀ ಜೆ. ದೇವೇಗೌಡ, 'ಡಿ' ಗ್ರೂಪ್ ನೌಕರ, ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ ಇವರ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸದರಿಯವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ನೀಡಿದೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಹಾಸನದ ಪ್ರಿನ್ಸಿಪಾಲ್ ಸೆಷನ್ಸ್ ಜಡ್ಜ್ ಮತ್ತು ಸ್ಪೆಷಲ್ ಜಡ್ಜ್ ನ್ಯಾಯಾಲಯವು ವಿಶೇಷ ಪ್ರಕರಣ ಸಂಖ್ಯೆ : 23/2003ರಲ್ಲಿ ಡಾ॥ ಎ. ಶೇಖರನ್ ಹಾಗೂ ಶ್ರೀ ಜೆ. ದೇವೇಗೌಡ ಇವರನ್ನು ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಿಂದ ದಿನಾಂಕ : 29–9–2008ರಂದು ಖುಲಾಸೆಗೊಳಿಸಿ ತೀರ್ಪು ನೀಡಿದೆ.

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಒಳಾಡಳಿತ ಇಲಾಖೆಯಿಂದ ಹೊರಡಿಸಲಾದ ಸರ್ಕಾರದ ಆದೇಶದಲ್ಲಿ ಹಾಸನದ ಪ್ರಿನ್ಸಿಪಾಲ್ ಸೆಷನ್ಸ್ ಜಡ್ಜ್ ಮತ್ತು ಸ್ಪೆಷಲ್ ಜಡ್ಜ್ ನ್ಯಾಯಾಲಯವು ವಿಶೇಷ ಪ್ರಕರಣ ಸಂಖ್ಯೆ : 23/2003ರಲ್ಲಿ ದಿನಾಂಕ : 29–09–2006ರಂದು ನೀಡಿದ ತೀರ್ಪಿನ ವಿರುದ್ಧ ಗೌ॥ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ : 417/2007 ರೀತ್ಯಾ ಮೇಲ್ಮನವಿ ಸಲ್ಲಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ತೀರ್ಪಿನಲ್ಲಿ ಗೌ॥ ಉಚ್ಚ ನ್ಯಾಯಾಲಯವು ಡಾ॥ ಎ. ಶೇಖರನ್, ಶಸ್ತ್ರಚಿಕಿತ್ಸಕರು ಮತ್ತು ಶ್ರೀ ಜೆ. ದೇವೇಗೌಡ, ಗ್ರೂಪ್ 'ಡಿ' ನೌಕರ ಇವರ ಲೋಕಾಯುಕ್ತ ಟ್ರ್ಯಾಪ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ ನಡೆಸಿ, ಕ್ರಿಮಿನಲ್ ಅಪೀಲ್ ಸಂಖ್ಯೆ : 417/2007ರಲ್ಲಿ ದಿನಾಂಕ : 10–08–2011 ರಂದು ಈ ಕೆಳಕಂಡಂತೆ ತೀರ್ಪು ನೀಡಿರುತ್ತದೆ.

> "The appeal is allowed setting aside the judgement and order of acquittal, the respondents 1 and 2 (Accused Nos. 1 and 2) are convicted for the offence punishable under Sections 7 and 13 (1) (d) read with 13(2) of the Act. For the offence under Section 7 of the Act, they are ordered to undergo simple imprisonment for a period of one year and to pay a fine of Rs. 5,000/- in default, to undergo simple imprisonment for three months.
>
> "For the offence under Section 13(1)(d) read with 13(2) of the Act, they are ordered to undergo simple imprisonment for one year and Respondent No. 1 (Accused No.1) is ordered to pay a fine of Rs. 25,000/-, in default, to undergo simple imprisonment for six months and Respondent No. 2 (Accused No. 2) is ordered to pay a fine of Rs. 5,000/-, in default to undergo simple imprisonment for six months. Both the sentences shall run concurrently. The Trial Court is directed to secure the presence of the respondents (accused) to undergo the sentence"

ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ಸರ್ಕಾರದ 2ನೇ ಕಾರಣ ಕೇಳುವ ಸೂಚನಾ ಪತ್ರಗಳೊಂದಿಗೆ ಗೌ॥ ಉಚ್ಚ ನ್ಯಾಯಾಲಯದ ತೀರ್ಪಿನ ಪ್ರತಿಯನ್ನು ಡಾ॥ ಎ. ಶೇಖರನ್ ಮತ್ತು ಶ್ರೀ ಜೆ. ದೇವೇಗೌಡ ಅವರಿಗೆ ಜಾರಿ ಮಾಡಿ ಅವರಿಂದ ರಕ್ಷಣಾ ಹೇಳಿಕೆಯನ್ನು ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (9)ರಲ್ಲಿ ಓದಲಾದ ರಕ್ಷಣಾ ಹೇಳಿಕೆಯಲ್ಲಿ ಡಾ॥ ಎ. ಶೇಖರನ್, ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಕುಣಿಗಲ್ ಇವರು ಗೌ॥ ಉಚ್ಚ ನ್ಯಾಯಾಲಯದ ತೀರ್ಪಿನ ವಿರುದ್ಧ ಗೌ॥ ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸದ್ದು, ಸದರಿ ನ್ಯಾಯಾಲಯದ ಅಂತಿಮ ತೀರ್ಪನ್ನು ಕಾಯ್ದಿರಿಸಿ ತಮಗೆ ನ್ಯಾಯ ದೊರಕಿಸಿಕೊಡಬೇಕೆಂದು ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (10)ರಲ್ಲಿ ಓದಲಾದ ಪತ್ರದೊಂದಿಗೆ ಮುಖ್ಯ ಆಡಳಿತಾಧಿಕಾರಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಶ್ರೀ ಜೆ. ದೇವೇಗೌಡ (ನಿವೃತ್ತ) 'ಡಿ' ಗ್ರೂಪ್ ನೌಕರ, ಇವರು ಶಸ್ತ್ರಚಿಕಿತ್ಸಕರು, ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ ಇವರಿಗೆ ಸಲ್ಲಿಸಿರುವ ರಕ್ಷಣಾ ಹೇಳಿಕೆಯ ಪ್ರತಿಯನ್ನು ಲಗತ್ತಿಸಿ ಕಳುಹಿಸಿದ್ದು. ಸದರಿ ಪ್ರತಿಯಲ್ಲಿ ಶ್ರೀ ಜೆ. ದೇವೇಗೌಡ ಅವರು ಗೌ॥ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲ್ ನಂ. 417/2007ರ ತೀರ್ಪಿನ್ನು ಗೌ॥ ಸರ್ವೋಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಮಿಸಲೇನಿಯಸ್ ಪಿಟಿಷನ್ ನಂ. 18300/2012ರಲ್ಲಿ ಪ್ರಶ್ನಿಸಿರುವುದಾಗಿ ತಿಳಿಸಿರುತ್ತಾರೆ.

ಗೌ॥ ಸರ್ವೋಚ್ಚ ನ್ಯಾಯಾಲಯವು ಕಾಲೇಜು ಶಿಕ್ಷಣ ಉಪನಿರ್ದೇಶಕರು (ಆಡಳಿತ) ಮದ್ರಾಸ್ ವಿರುದ್ಧ ಎಸ್. ನಗೂರ ಮೀರ ಪ್ರಕರಣದಲ್ಲಿ (ಎಐಆರ್ 1995 ಎಸ್‌ಸಿ 1364) ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ಇಂತಹ ಪ್ರಕರಣಗಳಲ್ಲಿ ಯಾವ ರೀತಿ ಕ್ರಮವಹಿಸಬೇಕೆಂಬ ಬಗ್ಗೆ ಸಿ.ಆ.ಸು. ಇಲಾಖೆಯು ಸುತ್ತೋಲೆ (ಸಂಖ್ಯೆ : ಸಿಆಸುಇ 9 ಸೇಇವಿ 95, ದಿನಾಂಕ : 26–06–1996) ಹೊರಡಿಸಿದ್ದು. ಈ ಕೆಳಕಂಡಂತೆ ಸೂಚನೆ ನೀಡಿದೆ.

"ಸಂವಿಧಾನದ ಅನುಚ್ಛೇದ 311(2)ರ ಅಡಿಯಲ್ಲಿನ ಎರಡನೇ ಪರಂತುಕದ ಖಂಡ(ಎ)ಯು ಕ್ರಿಮಿನಲ್ ಆರೋಪದ ಮೇಲೆ ದೋಷಸಿದ್ಧಿಯಾಗುವಂತೆ ಮಾಡಿದ ನಡತೆಯ ಬಗ್ಗೆ ಹೇಳುತ್ತದೆಯಾದ್ದರಿಂದ ದೋಷಸಿದ್ಧಿಯಾಗಿರುವುದನ್ನು ನಿಲಂಬನದಲ್ಲಿಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ, ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರೆ ವ್ಯವಹರಣೆ ಹೂಡಿದ್ದಾನೆ. ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನದಲ್ಲಿಟ್ಟಿದೆ ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾನೆ ಎಂಬ ಕಾರಣಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(1)ರನುಸಾರ ಕ್ರಮ ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿಲ್ಲ. ಇಂತಹ ಎಲ್ಲಾ ಸಂದರ್ಭಗಳಲ್ಲಿ ಸೂಕ್ತವಾದ ಕ್ರಮ ಎಂದರೆ, ಒಮ್ಮೆ ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಿರಬಹುದಾದ ಮೇಲ್ಮನವಿ ಇತ್ಯರ್ಥವಾಗುವವರೆಗೂ ಕಾಯದೆ ಸಂವಿಧಾನದ ಅನುಚ್ಛೇದ 311(2)ರಡಿಯಲ್ಲಿರುವ ಎರಡನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(1)ರನುಸಾರ ಶಿಸ್ತಿನ ಕ್ರಮ ಕೈಗೊಳ್ಳತಕ್ಕದ್ದು. ಇಲ್ಲವಾದಲ್ಲಿ ಕ್ರಿಮಿನಲ್ ನ್ಯಾಯಾಲಯದಲ್ಲಿ ತೀವ್ರ ಆರೋಪಕ್ಕಾಗಿ ದೋಷಸಿದ್ಧಿಯಾಗಿ ದಂಡನೆಗೆ ಗುರಿಯಾದಂತಹ ವ್ಯಕ್ತಿಯು ಸೇವೆಯಲ್ಲಿ ಮುಂದುವರಿಯಲು ಅವಕಾಶ ಕಲ್ಪಿಸಿದಂತಾಗುತ್ತದೆ. ಆದ್ದರಿಂದ ಮೇಲ್ಮನವಿ ಆದೇಶವು ಇತ್ಯರ್ಥವಾಗುವುದನ್ನು ಕಾಯುವುದು ಸೂಕ್ತವಲ್ಲ. ಆದರೆ, ಒಂದು ವೇಳೆ ಆಪಾದಿತ ಸರ್ಕಾರಿ ನೌಕರನು ಮೇಲಿನ ನ್ಯಾಯಾಲಯದಲ್ಲಿ ಖುಲಾಸೆ (acquit) ಯಾದರೆ, ಶಿಸ್ತು ಪ್ರಾಧಿಕಾರಿಯು ಆದೇಶವನ್ನು ಪರಿಷ್ಕರಿಸಬಹುದು. ಒಂದು ವೇಳೆ ಸರ್ಕಾರಿ ನೌಕರರನ್ನು ಪುನಃ ಸೇವೆಗೆ ತೆಗೆದುಕೊಂಡಲ್ಲಿ, ಆತನು ಸೇವೆಯಲ್ಲಿ ಮುಂದುವರಿದಿದ್ದರೆ ಅರ್ಹನಾಗಿರುತ್ತಿದ್ದಂಥ ಎಲ್ಲ ಸೌಲಭ್ಯಗಳಿಗೂ ಹಕ್ಕುಳ್ಳವನಾಗುತ್ತಾನೆ."

ಮೇಲೆ ಕ್ರಮಸಂಖ್ಯೆ (11)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಡಾ॥ ಎ. ಶೇಖರನ್ ಅವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಮತ್ತು ಶ್ರೀ ಜೆ. ದೇವೇಗೌಡ, ಅವರ ನಿವೃತ್ತಿ ವೇತನದ ಶೇಕಡಾ 50 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿಯನ್ನು ನೀಡಿರುತ್ತದೆ.

ಡಾ॥ ಎ. ಶೇಖರನ್ ಮತ್ತು ಶ್ರೀ ಜೆ. ದೇವೇಗೌಡ ಇವರ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಗೌ॥ ಉಚ್ಚ ನ್ಯಾಯಾಲಯವು ಶಿಕ್ಷೆ ವಿಧಿಸಿರುವುದರಿಂದ ಸದರಿ ತೀರ್ಪಿನ ವಿರುದ್ಧ ಆರೋಪಿತ ಸರ್ಕಾರಿ ಅಧಿಕಾರಿ/ನೌಕರರು ಗೌ॥ ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಮೇಲ್ಮನವಿಯ ಅಂತಿಮ ತೀರ್ಪಿನ ಷರತ್ತಿಗೊಳಪಟ್ಟು ಡಾ॥ ಎ. ಶೇಖರನ್, ಹಿಂದಿನ ಶಸ್ತ್ರಚಿಕಿತ್ಸಕರು, ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಪ್ರಸ್ತುತ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಕುಣಿಗಲ್ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಮತ್ತು ಶ್ರೀ ಜೆ. ದೇವೇಗೌಡ, 'ಡಿ' ದರ್ಜೆ ನೌಕರರು, (ನಿವೃತ್ತ) ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಇವರ ನಿವೃತ್ತಿ ವೇತನದ ಶೇಕಡಾ 50 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 121 ಎಂಎಸ್ಎ 2001, ಬೆಂಗಳೂರು, ದಿನಾಂಕ : 28-06-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಗೌ॥ ಉಚ್ಚ ನ್ಯಾಯಾಲಯವು ಕ್ರಿಮಿನಲ್ ಅಪೀಲ್ ಸಂಖ್ಯೆ : 417/2007ರಲ್ಲಿ ದಿನಾಂಕ: 10-08-2011ರಂದು ನೀಡಿರುವ ತೀರ್ಪಿನ ವಿರುದ್ಧ ಗೌ॥ ಸರ್ವೋಚ್ಚ ನ್ಯಾಯಾಲಯದಲ್ಲಿ ಡಾ॥ ಎ. ಶೇಖರನ್ ಮತ್ತು ಶ್ರೀ ಜೆ. ದೇವೇಗೌಡ ಅವರು ಸಲ್ಲಿಸಿರುವ ಮೇಲ್ಮನವಿಯಲ್ಲಿ ಗೌ॥ ಸರ್ವೋಚ್ಚ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿನ ಷರತ್ತಿಗೊಳಪಟ್ಟು, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವ.ನಿ ಮತ್ತು ಮೇ) ನಿಯಮಾವಳಿಗಳು 1957ರ ನಿಯಮ 8 (viii)ರ ಅನ್ವಯ ಡಾ॥ ಎ. ಶೇಖರನ್, ಹಿಂದಿನ ಶಸ್ತ್ರಚಿಕಿತ್ಸಕರು, ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಹಾಸನ ಜಿಲ್ಲೆ ಪ್ರಸ್ತುತ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಕುಣಿಗಲ್, ತುಮಕೂರು ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತ ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ. ಮುಂದುವರೆದು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(1)(ಎ)ರ ಅನ್ವಯ ಶ್ರೀ ಜೆ. ದೇವೇಗೌಡ, 'ಡಿ' ದರ್ಜೆ ನೌಕರರು (ನಿವೃತ್ತ) ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಹಾಸನ ಜಿಲ್ಲೆ ಇವರ ನಿವೃತ್ತಿ ವೇತನದ ಶೇಕಡಾ 50 (ಐವತ್ತು) ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲಾ ಎಸ್. ಚೌಗಲಾ**

**PR. 841**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## COMMERCE AND INDUSTRIES SECRETARIAT

**SUB :** Authorising VTPC (formerly known as VITC) as Nodal Agency to deal with all the matters related to SEZ, EOUs and export related matters-reg.

**PREAMBLE :**

Visvesvaraya Industrial Trade Centre is a Nodal Agency for promotion of international trade from the State. VITC conducts various capacity building programmes, WTO/IPR related matters, facilitate exporters/industries/traders for promotion of international trade and takes several initiatives and measures for development and growth of exports. VITC is also a nodal agency for implementation of Assistance to States for Developing Export Infrastructure and Allied Activities (ASIDE) scheme of Govt. of India.

For establishment of SEZ, SEZ units and EOUs in the State are being recommended by the Commissioner for Industrial Development to Govt. of India for approvals. These units are also being provided with various incentives and concessions as per the prevailing Policies of the State.

In this regard, it is felt that the export related activities are to be handled and supported by one agency which could also act as a Nodal Agency and provide secretariat services to the Commissioner for Industrial Development in receiving proposals from prospective investors, processing and recommending to Govt. of India with his due approval. Hence the following Order.

**GOVERNMENT ORDER NO. CI 63 SPI 2012, BANGALORE, DATED : 01-07-2013.**

The Government is pleased to consider the proposal of the Commissioner and appoint VTPC (Formerly VITC) as nodal agency for activities related to SEZs and EOUs.

VTPC shall perform the following functions :-

1. Provide secretariat services to the Commissioner for Industrial Development, for receiving, processing and assist for preparing recommendation from Commissioner for Industrial Development to GoI.
2. Extending Incentives and concessions under Industrial Policy 2009-14, SEZ Policy and other policies.
3. Shall be custodian of all Files/records.
4. Shall submit appropriate report, compliance to Central and State agencies with approval of Commissioner for Industrial Development.

By Order and in the name of the Governor of Karnataka,

**P.R. 852**

**SHIVASHANKAR NAIK. L**
Desk Officer (Technical Cell),
Commerce and Industries Department,

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ವಿಶ್ವ ವ್ಯಾಪಾರ ಸಮಾವೇಶ–2014 ಆಯೋಜಿಸುವ ಹಾಗೂ ಕಾರ್ಯಕ್ರಮವನ್ನು ನಿರ್ವಹಿಸಲು ಸಮಿತಿಯನ್ನು ರಚಿಸುವ ಬಗ್ಗೆ.

**ಪ್ರಸ್ತಾವನೆ :**

ವಿಶ್ವೇಶ್ವರಯ್ಯ ವ್ಯಾಪಾರ ಉತ್ತೇಜನ ಕೇಂದ್ರ ಸಂಸ್ಥೆಯು ಕರ್ನಾಟಕ ಸರ್ಕಾರದ ಅಂಗಸಂಸ್ಥೆಯಾಗಿದ್ದು, ಅಂತರಾಷ್ಟ್ರೀಯ ವ್ಯಾಪಾರವನ್ನು ಉತ್ತೇಜಿಸುವ ಒಂದು ನೋಡಲ್ ಏಜೆನ್ಸಿಯಾಗಿದೆ. ಕರ್ನಾಟಕ ರಾಜ್ಯವು ತಂತ್ರಜ್ಞಾನ, ವಿದ್ಯುನ್ಮಾನ, ಸಿದ್ಧ ಉಡುಪುಗಳು, ಪೆಟ್ರೋಲಿಯಂ ಉತ್ಪನ್ನಗಳು, ಆಭರಣಗಳು ಹಾಗೂ ರತ್ನಗಳು, ಇಂಜಿನಿಯರಿಂಗ್ ಉತ್ಪನ್ನಗಳು, ಆಹಾರ ಮತ್ತು ಕೃಷಿ ಆಧಾರಿತ ಉತ್ಪನ್ನಗಳು, ಔಷಧ ಮತ್ತು ಔಷಧೀಯ ಉತ್ಪನ್ನಗಳು ಮುಂತಾದ ಕ್ಷೇತ್ರಗಳಲ್ಲಿ ರಫ್ತು ವಹಿವಾಟಿನಲ್ಲಿ ಸಾಧನೆ ಮಾಡುತ್ತಿದೆ.

ಕರ್ನಾಟಕ ಸರ್ಕಾರವು ರಾಜ್ಯದಲ್ಲಿ ರಫ್ತು ಅಭಿವೃದ್ಧಿಯನ್ನು ಹೆಚ್ಚಿನ ರೀತಿಯಲ್ಲಿ ಉತ್ತಮ ಪಡಿಸಲು ಹಲವಾರು ರಫ್ತು ಸಾಮರ್ಥ್ಯ/ಉತ್ತೇಜನ ಕಾರ್ಯಕ್ರಮಗಳನ್ನು ನಡೆಸುತ್ತಿರುತ್ತದೆ. ಅಲ್ಲದೇ, ರಫ್ತು ಉದ್ದಿಮೆದಾರರಿಗೆ ಸೂಕ್ತ ಮಾರುಕಟ್ಟೆ ಕಲ್ಪಿಸಲು ರಫ್ತುದಾರರು ಸಿದ್ಧ ಪಡಿಸುವಂತಹ ಉತ್ಪನ್ನಗಳನ್ನು ಮಾರಾಟ ಮಾಡುವ ಹಾಗೂ ಸೂಕ್ತ ಮಾರುಕಟ್ಟೆಯ ಸೌಲಭ್ಯ ಒದಗಿಸುವ ದಿಸೆಯಲ್ಲಿ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ವಸ್ತು ಪ್ರದರ್ಶನದಲ್ಲಿ ಪ್ರದರ್ಶಿಸಲು ಕಾರ್ಯತಂತ್ರ ಅಳವಡಿಸಿದೆ. ಅವುಗಳ ಸಾಮರ್ಥ್ಯವನ್ನು ಅಂತರಾಷ್ಟ್ರೀಯ ಮಟ್ಟದಲ್ಲಿ ಉನ್ನತೀಕರಿಸಲು/ಮೇಲ್ದರ್ಜೆಗೆ ಏರಿಸಲು ಕಾರ್ಯತಂತ್ರವನ್ನು ರೂಪಿಸುವುದು ಹಾಗೂ ಈ ನಿಟ್ಟಿನಲ್ಲಿ ವಿಶ್ವ ವ್ಯಾಪಾರ ಸಮಾವೇಶ–2014ನ್ನು ಸೂಕ್ತವೆಂದು ಭಾವಿಸಿ ನಡೆಸಲು ಉದ್ದೇಶಿಸಲಾಗಿದೆ. ಈ ವ್ಯಾಪಾರ ಸಮಾವೇಶಕ್ಕೆ ವಿವಿಧ ದೇಶಗಳ ಅವಕಾಶಗಳ ಬಗ್ಗೆ ಕಾರ್ಯಾಗಾರಗಳು, ವಸ್ತುಪ್ರದರ್ಶನ, ರಫ್ತುದಾರರು ಮತ್ತು ಖರೀದಿದಾರರ ಭೇಟಿ, ಅಂತರ್ಜಾಲ ಸಮನ್ವಯ ಮತ್ತು ವ್ಯಾಪಾರ ಮೇಳ ಹಾಗೂ ರಫ್ತು ಪ್ರಶಸ್ತಿ ಕಾರ್ಯಕ್ರಮವನ್ನು ನಡೆಸಲು ತೀರ್ಮಾನಿಸಲಾಗಿದೆ. ಆದ್ದರಿಂದ, ಈ ಸಮಾವೇಶವನ್ನು ನಡೆಸಲು ಅಗತ್ಯವಾದ ಸಲಹೆ ಸೂಚನೆ/ಅಭಿಪ್ರಾಯ/ಕಾರ್ಯತಂತ್ರ/ಆಡಳಿತ/ ಸಮನ್ವಯ/ ಅನುಮೋದನೆ ಇತ್ಯಾದಿಗಳ ಸೇವೆಗಳನ್ನು ಕ್ರೋಢೀಕರಿಸಿ ನಿರ್ದೇಶನ ನೀಡುವುದು ಅವಶ್ಯಕವಾಗಿರುತ್ತದೆ. ಆದ್ದರಿಂದ, ಘಟನಾ/ ಕಾರ್ಯಕ್ರಮಗಳ ನಿರ್ವಹಣೆಗೆ ಉತ್ತಮವಾಗಿ ಜಾರಿಗೊಳಿಸಲು/ಪರಿಶೀಲಿಸಲು ಸಮಿತಿಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಬೆಂಗಳೂರು ರವರ ಅಧ್ಯಕ್ಷತೆಯಲ್ಲಿ ಜಾರಿಗೊಳಿಸಲು ವಿಶ್ವೇಶ್ವರಯ್ಯ ವ್ಯಾಪಾರ ಉತ್ತೇಜನ ಕೇಂದ್ರ (ವಿಟಿಪಿಸಿ) ರವರು ಕೋರಿರುತ್ತಾರೆ.

ಮೇಲ್ಕಂಡ ವಿಷಯಗಳನ್ನು ಪರಿಶೀಲಿಸಲಾಗಿ, ಈ ಕೆಳಕಂಡಂತೆ ಸರ್ಕಾರಿ ಆದೇಶದಂತೆ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 153 ಎಸ್‌ಪಿಐ 2013, ಬೆಂಗಳೂರು, ದಿನಾಂಕ : 26–08–2013.**

ರಾಜ್ಯದಲ್ಲಿ ರಫ್ತು ನಿರ್ವಹಣೆಯನ್ನು ಉತ್ತಮ ಪಡಿಸುವ ದೃಷ್ಟಿಯಿಂದ ವಿಶ್ವ ವ್ಯಾಪಾರ ಸಮಾವೇಶ–2014ನ್ನು ನಡೆಸಲು ಹಾಗೂ ಇದರ ಬಗ್ಗೆ ಸೂಕ್ತ ನಿರ್ವಹಣೆ, ಮೌಲ್ಯವರ್ಧನೆ, ಸೇವೆ ಒದಗಿಸುವವರ ಆಯ್ಕೆ, ಅಗತ್ಯವಾದ ನಿರ್ವಹಣೆ, ಸಲಹೆ ಸೂಚನೆ/ ಅಭಿಪ್ರಾಯ/ಕಾರ್ಯತಂತ್ರ/ ಆಡಳಿತ/ ಅನುಮೋದನೆ/ ಸಮನ್ವಯ ಹಾಗೂ ಮೇಲ್ವಿಚಾರಣೆ ನಡೆಸಲು ಕಾರ್ಯಕ್ರಮ/ ಘಟನಾ ನಿರ್ವಹಣಾ ಸಮಿತಿಯನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಬೆಂಗಳೂರು ರವರ ಅಧ್ಯಕ್ಷತೆಯಲ್ಲಿ ನಡೆಸಲು ಕೆಳಕಂಡ ಸದಸ್ಯರುಗಳನ್ನು ಒಳಗೊಂಡಂತೆ ರಚನೆ ಮಾಡಲಾಗಿದೆ.

| | | | |
|---|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | : | ಅಧ್ಯಕ್ಷರು |
| 2. | ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ | : | ಸದಸ್ಯರು |
| 3. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ | : | ಸದಸ್ಯರು |
| 4. | ನಿರ್ದೇಶಕರು, ತಾಂತ್ರಿಕ ಕೋಶ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | : | ಸದಸ್ಯರು |

5. ಮುಖ್ಯ ಸಲಹೆಗಾರರು, ಟೆಕ್ಸಾಕ್ : ಸದಸ್ಯರು

6. ವ್ಯವಸ್ಥಾಪಕ ನಿರ್ದೇಶಕರು, ವಿಶ್ವೇಶ್ವರಯ್ಯ ವ್ಯಾಪಾರ ಉತ್ತೇಜನ ಕೇಂದ್ರ : ಸದಸ್ಯ ಕಾರ್ಯದರ್ಶಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 854

**ಶಿವಶಂಕರ್ ನಾಯಕ್ ಎಲ್.**

ಪೀಠಾಧಿಕಾರಿ (ತಾಂತ್ರಿಕ ಕೋಶ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಕೆ. ಜಗದೀಶ, ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಇವರ ವಿರುದ್ಧ ದಾಖಲಾಗಿರುವ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ/(ಜಿ)/ಎಂ–59/ಸಿಆರ್–04/2013 ಮಂಡ್ಯ ದಿನಾಂಕ : 27–07–2013.
2. ತನಿಖಾಧಿಕಾರಿಯವರ ಅಂತಿಮ ವರದಿ
3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ಪತ್ರ, ಪ್ರಾಯೋಗಿಕ ಪಂಚನಾಮೆ, ಹಣ ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ದಾಖಲೆಗಳು.

**ಪ್ರಸ್ತಾವನೆ :**

ಶ್ರೀ ಕೆ. ಜಗದೀಶ, ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಇವರ ವಿರುದ್ಧ ಗುನ್ನೆ ಸಂಖ್ಯೆ : 04/2013ರಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಡ್ಯ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಮೇಲೆ ಓದಲಾದ–2, 3) ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ : 27–07–2013 (ಮೇಲೆ ಓದಲಾದ–1) ರೊಡನೆ ಕಳುಹಿಸುತ್ತಾ, ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ–7, 13(1)(ಡಿ) ರ ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಹಾಗೂ 19(1)(ಬಿ) ರ ಅನ್ವಯ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ಸಂಖ್ಯೆ : ಲೋಕ್/ಐಎನ್‌ವಿ/(ಜಿ)/ಎಂ–59/ಸಿಆರ್–04/2013 ಮಂಡ್ಯ ದಿನಾಂಕ : 27–07–2013ರೊಂದಿಗೆ ಕಳುಹಿಸಿಕೊಟ್ಟಿರುವ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಫಿರ್ಯಾದಿ ಶ್ರೀ ಬಿ. ತಿಮ್ಮಯ್ಯ, ಶಿಕ್ಷಕರು, ನಿರ್ಮಲ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ, ಅರೆಕೆರೆ ಗ್ರಾಮ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ರವರ ಸ್ವಲಿಖಿತ ದೂರಿನ ದಿನಾಂಕ : 25–04–2013.
2. ಮಂಡ್ಯ ಲೋಕಾಯುಕ್ತ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ : 04/2013 ಕಲಂ 7, 13(1)(ಡಿ) ಸಹವಾಚನ 13(2) ಪಿಸಿ ಕಾಯ್ದೆ–1988 ಪ್ರಥಮ ವರ್ತಮಾನ ವರದಿ ದಿನಾಂಕ : 25–04–2013.
3. ಪ್ರಾಯೋಗಿಕ ಪಂಚನಾಮೆ (ಎಂಟ್ರಸ್ಟ್‌ಮೆಂಟ್ ಮಹಜರ್) ದಿನಾಂಕ : 25–04–2013.
4. ಹಣ ಜಪ್ತಿ ಪಂಚನಾಮೆ (ಟ್ರ್ಯಾಪ್ ಮಹಜರ್) ದಿನಾಂಕ : 25–04–2013.
5. ಸಹಾಯಕ ರಸಾಯನಿಕ ಪರೀಕ್ಷಕರು, ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು ಇವರ ವರದಿ ಪತ್ರ ಸಂಖ್ಯೆ : PHI/CME/LOK/14/13–14, ದಿನಾಂಕ : 15–05–2013.
6. ಕೃತ್ಯ ನಡೆದ ಸ್ಥಳದ ನಕಾಶೆ.
7. **ಸಾಕ್ಷಿಗಳ ಹೇಳಿಕೆಗಳು :**
    1. ಶ್ರೀ ಬಿ. ತಿಮ್ಮಯ್ಯ, ಶಿಕ್ಷಕರು, ನಿರ್ಮಲ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ, ಅರೆಕೆರೆ ಗ್ರಾಮ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ (ಫಿರ್ಯಾಧಿದಾರರು)
    2. ಶ್ರೀ ಆರ್. ವೆಂಕಟೇಶ್ ತಂದೆ ಲೇ॥ ಎಸ್. ರಾಮಸ್ವಾಮಿ, 55 ವರ್ಷ, ದ್ವಿತೀಯ ದರ್ಜೆ ಸಹಾಯಕರು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ, ಮಂಡ್ಯ ಜಿಲ್ಲೆ, ಮಂಡ್ಯ (ಪಂಚ–1)
    3. ಶ್ರೀ ಗೋಪಾಲ ಕೃಷ್ಣ ತಂದೆ ಲೇ॥ ನಾಗರಾಜು, 25 ವರ್ಷ, ದ್ವಿತೀಯ ದರ್ಜೆ ಸಹಾಯಕರು, ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ಮೀನುಗಾರಿಕೆ ಇಲಾಖೆ, ಮಂಡ್ಯ (ಪಂಚ–2)
    4. ಶ್ರೀ ಹೆಚ್.ವಿ. ರಮೇಶ್ ತಂದೆ ಲೇ॥ ವೆಂಕಟಸ್ವಾಮಯ್ಯ, 50 ವರ್ಷ, ಪತ್ರಾಂಕಿತ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ.

5. ಶ್ರೀ ಜಿ.ಕೆ. ಭೀಮೇಗೌಡ, ತಂದೆ ಲೇ॥ ಕೆಂಪೇಗೌಡ, 43 ವರ್ಷ, ಸಿ.ಸಿ.ಟಿ., ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ.
6. ಶ್ರೀ ಎಂ. ನರೇಂದ್ರ ಬಿನ್ ನಾಗಪ್ಪ, 40 ವರ್ಷ, ಕಿರಿಯ ಅಭಿಯಂತರರು, ನಂ. 6ನೇ ಲೋಕೋಪಯೋಗಿ ಉಪ–ವಿಭಾಗ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ.
7. ಶ್ರೀ ಶಿವರುದ್ರಯ್ಯ, ಸಿ.ಹೆಚ್.ಸಿ., ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಡ್ಯ.
8. ಶ್ರೀ ಸುಬ್ರಮಣ್ಯ ಅರಸ್, ಸಿ.ಹೆಚ್.ಸಿ., ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಡ್ಯ.
9. ಶ್ರೀ ಸಿ. ವೆಂಕಟೇಶಾಚಾರ್, ಸಿ.ಹೆಚ್.ಸಿ. ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಡ್ಯ
10. ಶ್ರೀ ಭವಾನಿಶಂಕರ್, ಸಿಪಿಸಿ, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಡ್ಯ
11. ಶ್ರೀ ಎನ್.ಪಿ. ಶಂಕರ್, ಸಿಪಿಸಿ, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಡ್ಯ
12. ಶ್ರೀ ಎಸ್. ಸೋಮಶೇಖರ್, ಸಿಪಿಸಿ, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಡ್ಯ
13. ಶ್ರೀಮತಿ ಜೋಶಿಟಾ, ಮಹಿಳಾ ಪಿಸಿ. ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಡ್ಯ
14. ಶ್ರೀ ಎಂ. ಬಸವರಾಜು, ಎ.ಪಿ.ಸಿ., ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಡ್ಯ
15. ಶ್ರೀ ರವಿ, ಎ.ಪಿ.ಸಿ., ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಡ್ಯ.

8. **ಲಂಚ ಕೇಳಲು ಆಧಾರವಾದ ಕಡತ :–** ಶ್ರೀ ಬಿ. ತಿಮ್ಮಯ್ಯ, ರವರು ಅರೆಕೆರೆಯ ನಿರ್ಮಲ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದು, ಈ ಮಧ್ಯೆ ಕಾರಣಾಂತರಗಳಿಂದ ಇವರನ್ನು ಕೆಲಸದಿಂದ ತೆಗೆದು ಹಾಕಲಾಗಿತ್ತು. ಕರ್ನಾಟಕ ರಾಜ್ಯ ಎಸ್.ಸಿ/ಎಸ್.ಟಿ. ಆಯೋಗ, ಬೆಂಗಳೂರು ರವರ ಆದೇಶದಂತೆ ಫಿರ್ಯಾದಿಯವರನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳುವಂತೆ ತೀರ್ಮಾನವಾಗಿರುತ್ತದೆ. ಈ ಬಗ್ಗೆ ಫಿರ್ಯಾದಿಯವರಿಗೆ ಬರಬೇಕಾದ ವೇತನ ಸೌಲಭ್ಯಗಳನ್ನು ಬಿಡುಗಡೆ ಮಾಡಿಕೊಡಲು ಶ್ರೀರಂಗಪಟ್ಟಣ ತಾಲ್ಲೂಕು, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆ. ಜಗದೀಶರವರು ರೂ. 5,000/– ಲಂಚದ ಹಣಕ್ಕೆ ಬೇಡಿಕೆ ಇಟ್ಟಿರುತ್ತಾರೆ. ಫಿರ್ಯಾದುದಾರರಿಗೆ ಲಂಚದ ಹಣವನ್ನು ಕೊಟ್ಟು ಕೆಲಸ ಮಾಡಿಸಿ ಕೊಳ್ಳಲು ಇಷ್ಟವಿಲ್ಲದ ಕಾರಣ ದಿನಾಂಕ : 25–04–2013ರಂದು ಮಂಡ್ಯ ಲೋಕಾಯುಕ್ತ ಕಛೇರಿಗೆ ಬಂದು ಲಿಖಿತ ದೂರನ್ನು ಸಲ್ಲಿಸಿರುತ್ತಾರೆ.

9. **ಆಪಾದಿತರ ಸಮಜಾಯಿಷಿ ಹೇಳಿಕೆ ದಿನಾಂಕ: 25–04–2013 :–**ಆಪಾದಿತ ಅಧಿಕಾರಿ ಶ್ರೀ ಕೆ. ಜಗದೀಶ, ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ರವರು ಬರೆದುಕೊಟ್ಟಿರುವ ವಿವರಣೆ :–

"ಶ್ರೀ ಬಿ. ತಿಮ್ಮಯ್ಯ, ಶಿಕ್ಷಕರು, ನಿರ್ಮಲ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ, ಅರೆಕೆರೆ ರವರು ತಮ್ಮ ವೇತನ ಬಾಕಿಯನ್ನು ಮಾಡಿಕೊಡುವಂತೆ ಮನವಿ ಮಾಡಿದ್ದರು. ಇವರಿಗೆ ಮಾರ್ಚಿ 2013 ತಿಂಗಳ ವೇತನ ಮಾಡಿರುವುದಿಲ್ಲ. ಕಾರಣ ಜಿಲ್ಲಾ ಪಂಚಾಯತ್‌ನಿಂದ ಈವರೆಗೂ ಅನುದಾನ ಬಿಡುಗಡೆಯಾಗಿರುವುದಿಲ್ಲ. ನನಗೆ 4 ತಿಂಗಳಿಂದ ವೇತನ ಆಗಿಲ್ಲದಿರುವುದರಿಂದ ಶ್ರೀ ತಿಮ್ಮಯ್ಯ ರವರಿಗೆ ನಾನು ಸಾಲದ ರೂಪದಲ್ಲಿ ರೂ. 5000/– ನೀಡುವಂತೆ ಕೋರಿಕೊಂಡಿರುತ್ತೇನೆ. ಆದರೆ ಸದರಿಯವರು ಈ ದಿನ ನನಗೆ ಸಾಲದ ರೂಪದಲ್ಲಿ ರೂ. 5000/– ಹಣವನ್ನು ಈ ದಿನ ನೀಡಿರುತ್ತಾರೆ. ಈ ಹಣವನ್ನು ಅವರಿಗೆ ನನ್ನ ವೇತನ ಆದ ಸಂದರ್ಭದಲ್ಲಿ ನೀಡುತ್ತೇನೆ ಎಂದು ತಿಳಿಸಿದೆ. ಆದರೂ ಸದರಿಯವರು ನನ್ನ ಮೇಲೆ ಲೋಕಾಯುಕ್ತಕ್ಕೆ ದೂರು ನೀಡಿ ಟ್ರ್ಯಾಪ್ ಮಾಡಿಸಿರುತ್ತಾರೆ. ಇಂತಹ ತಪ್ಪುಗಳನ್ನು ನಾನು ಎಂದಿಗೂ ಮಾಡುವುದಿಲ್ಲ ಎಂದು ತಮ್ಮಲ್ಲಿ ವಿನಯಪೂರ್ವಕವಾಗಿ ಪ್ರಾರ್ಥಿಸಿಕೊಳ್ಳುತ್ತೇನೆ. ಹಾಗೂ ದಯಮಾಡಿ ನನ್ನನ್ನು ಆರೋಪದಿಂದ ಮುಕ್ತಗೊಳಿಸಿಕೊಡಬೇಕೆಂದು ತಮ್ಮಲ್ಲಿ ಮತ್ತೊಮ್ಮೆ ಪ್ರಾರ್ಥಿಸಿಕೊಳ್ಳುತ್ತೇನೆ. ನಾನು ಚುನಾವಣಾ ಕೆಲಸದಲ್ಲಿರುವುದರಿಂದ ಚುನಾವಣೆಯವರೆಗೂ ನನ್ನನ್ನು ಮುಂದುವರೆಸಿ ಕೊಡುವಂತೆ ವಿನಂತಿಸಿಕೊಳ್ಳುತ್ತೇನೆ"

ತನಿಖಾಧಿಕಾರಿಗಳಾದ ಶ್ರೀ ಸಂತೋಷ, ಕೆ. ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಡ್ಯ ಇವರು ಶ್ರೀ ಕೆ. ಜಗದೀಶ, ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಮಂಡ್ಯ ಪೊಲೀಸ್ ಠಾಣೆಯಲ್ಲಿ ಮೊ. ಸಂಖ್ಯೆ : 04/2013ರಲ್ಲಿ ಲಂಚ ಪ್ರತಿಬಂಧಕ ಕಾಯ್ದೆ 1988ರ ಕಲಂ–7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿರುತ್ತಾರೆ.

ಆಪಾದಿತರಾದ ಶ್ರೀ ಕೆ. ಜಗದೀಶ, ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಇವರು ಫಿರ್ಯಾದಿದಾರ ಶ್ರೀ ಬಿ. ತಿಮ್ಮಯ್ಯ, ಶಿಕ್ಷಕರು, ನಿರ್ಮಲ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ, ಅರೆಕೆರೆ ಗ್ರಾಮ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಇವರನ್ನು ಕಾರಣಾಂತರಗಳಿಂದ ಕೆಲಸದಿಂದ ತೆಗೆದು ಹಾಕಲಾಗಿತ್ತು. ಕರ್ನಾಟಕ ರಾಜ್ಯ ಎಸ್.ಸಿ./ಎಸ್.ಟಿ. ಆಯೋಗ, ಬೆಂಗಳೂರು ರವರ ಆದೇಶದಂತೆ ಫಿರ್ಯಾದಿಯವರನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳುವಂತೆ ತೀರ್ಮಾನವಾಗಿರುತ್ತದೆ. ಈ ಬಗ್ಗೆ ಫಿರ್ಯಾದಿಯವರಿಗೆ ಬರಬೇಕಾದ ವೇತನ ಸೌಲಭ್ಯಗಳನ್ನು ಬಿಡುಗಡೆ ಮಾಡಿಕೊಡಲು ರೂ. 5000/–ಗಳನ್ನು ಲಂಚವಾಗಿ ಕೊಡಬೇಕೆಂದು ಒತ್ತಾಯ ಮಾಡಿರುತ್ತಾರೆ. ದಿನಾಂಕ :25–04–2013ರಂದು ಮಧ್ಯಾಹ್ನ 3.30 ಗಂಟೆಗೆ ಶ್ರೀರಂಗಪಟ್ಟಣ ತಾಲ್ಲೂಕು, ಬಿ.ಇಓ. ಕಛೇರಿಯಲ್ಲಿ, ಆಪಾದಿತ ಅಧಿಕಾರಿಯ ಫಿರ್ಯಾದುದಾರರಾದ ಶ್ರೀ ಬಿ. ತಿಮ್ಮಯ್ಯ ಇವರಿಂದ ರೂ. 5000/–ಗಳನ್ನು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಸದರಿ ಘಟನಾವಳಿಯನ್ನು ನೆರಳು ಸಾಕ್ಷಿ ಪಂಚ ನಂ. 1 ಶ್ರೀ ಆರ್. ವೆಂಕಟೇಶ್ ಇವರು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಹಾಗೂ ಆರೋಪಿತರ ಬಳಿ ಇದ್ದ ಲಂಚದ ಹಣ ರೂ. 5000/–ಗಳನ್ನು ತನಿಖಾಧಿಕಾರಿಗಳು ವಶಪಡಿಸಿಕೊಂಡಿರುತ್ತಾರೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988 ರ ಕಲಂ–7, 13(1)(ಡಿ) ಜೊತೆಯಲ್ಲಿ ಓದಲಾದ 13(2) ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ–7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ವಜಾ ಮಾಡುವ ಅಧಿಕಾರವನ್ನು ಹೊಂದಿದ್ದು, ಲಂಚ ನಿರೋಧಕ ಕಾಯ್ದೆ 1988 ಕಲಂ–19(1)(ಬಿ) ರ ಅಡಿ ಆಪಾದಿತ ನೌಕರರಾದ ಶ್ರೀ ಕೆ. ಜಗದೀಶ, ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಇವರನ್ನು ಕಲಂ–7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಂಡಾರ್ಹ ಅಪರಾಧ ಎಸಗಿರುವುದರಿಂದ ಕಲಂ–19(1)(ಬಿ)ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಮಂಜೂರಾತಿ ನೀಡಲು ತೀರ್ಮಾನಿಸಿದೆ. ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 36 ಡಿಜಿಒ 2013, ಬೆಂಗಳೂರು, ದಿನಾಂಕ : 17ನೇ ಸೆಪ್ಟೆಂಬರ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಆರೋಪಿಯಾದ ಶ್ರೀ ಕೆ. ಜಗದೀಶ, ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ–7 13(1)(ಡಿ) ಜೊತೆಗೆ 13(2) ಕಲಂ–19(1)(ಬಿ)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ದೃಢಪಟ್ಟಿರುವುದರಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾಗುವ ಎಲ್ಲಾ ಆದೇಶಗಳನ್ನು ಅಥವಾ ಅಧಿಸೂಚನೆಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕಿರುತ್ತದೆ.

ಸದರಿ ನಿಯಮಾವಳಿಯ ನಿಯಮ–19(1)(ಬಿ)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿರುವ ಆದೇಶಗಳು ಮತ್ತು ಅಧಿಸೂಚನೆಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿಗಳು 1977ರ ಈ ಮೇಲ್ಕಂಡ ಆದೇಶವನ್ನು ಸರ್ಕಾರದ ಪರವಾಗಿ ಕಛೇರಿಯ ಮೊಹರು ಮತ್ತು ಸರ್ಕಾರದ ಅಧೀನ ಕಾರ್ಯದರ್ಶಿಯ ಸಹಿಯ ಅಡಿಯಲ್ಲಿ ದಿನಾಂಕ : 17–09–2013 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಆರ್. ಅನ್ನಪೂರ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸಮಿತಿಗಳು).

**P.R. 909**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು–59